ಅಡಗಿದ್ದನೆಂಬ ವರ್ಣನೆ ಇರುವುದು. ವೃತ್ರಾಸುರನು ದೇವತೆಗಳ ಶಿಲ್ಪಿಯಾದ ತ್ವಷ್ಟೃವಿನ ಮಗನು. ಇವನು ಬ್ರಾಹ್ಮಣನಾದುದರಿಂದ ಇವನ ಸಂಹಾರದಿಂದ ತಾನು ಮಹಾಪರಾಧಮಾಡಿದನೆಂದು ತಿಳಿದು ಇಂದ್ರನು ದೂರ ದೇಶಕ್ಕೆ ಹೊರಟುಹೋದನೆಂಬ ವಿಷಯವು—

(೧) **ಇಂದ್ರೋ ವೈ ವೃತ್ರಂ ಹತ್ವಾ ನಾಸ್ತೃಷೀತಿ ಮನ್ಯಮಾನಃ ಪರಾಃ ಪರಾವತೋಽಗಚ್ಛತ್ ॥**
(ಐ. ಬ್ರಾ. ೩-೧೫)

(೨) **ಇಂದ್ರೋ ವೃತ್ರಗ್ಂ ಹತ್ವಾ । ಪರಾಂ ಪರಾವತಮಗಚ್ಛತ್। ಅಪಾರಾಧಮಿತಿ ಮನ್ಯಮಾನಃ ॥**
(ತೈ. ಬ್ರಾ. ೧-೬-೭-೪)

ಭಾಷ್ಯಕಾರರು ಉದಹರಿಸಿರುವ ಮೇಲಿನ ಶ್ರುತಿವಾಕ್ಯಗಳಿಂದ ಸ್ಥಿರಪಟ್ಟಿರುವುದು. ಈ ಶ್ರುತಿವಾಕ್ಯಗಳ ಆಧಾರದ ಮೇಲೆಯೇ ಪುರಾಣಾದಿಗಳಲ್ಲಿ ಈ ವಿಷಯವು ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವುದೆಂದು ಧಾರಾಳವಾಗಿ ಹೇಳಬಹುದು.

**ಅಹೇರ್ಯಾತಾರಂ**—ವೃತ್ರಾಸುರನ ಕಡೆಯಿಂದ ತನ್ನನ್ನು ಕೊಲ್ಲುವುದಕ್ಕಾಗಿ ಬರುವ ಪುರುಷನನ್ನು.

**ನವ ಚ ನವತಿಂ ಚ**—ತೊಂಭತ್ತೊಂಭತ್ತು ಎಂದರೆ ಅನೇಕ ನದಿಗಳನ್ನು. ಬಹುದೂರದೇಶ ಹೋಗುವಾಗ ದಾರಿಯಲ್ಲಿ ಅನೇಕ ನದಿಗಳು ಸಿಕ್ಕುವವು. ಅವುಗಳನ್ನೆಲ್ಲಾ ದಾಟಿ ಬಹುದೂರ ಹೋದನೆಂದಭಿಪ್ರಾಯವು.

**ಸ್ರವಂತೀಃ—ಸ್ರು ಗತೌ ।** ಪ್ರವಾಹರೂಪದಲ್ಲಿ ಹರಿಯುತ್ತಿರುವ ನದಿಗಳು.

**ಶ್ಯೇನೋ ನ**—ಶ್ಯೇನವೆಂಬ ಪಕ್ಷಿಯು, ಗಿಡುಗನು. ಇದು ಬಹುದೂರ ವೇಗವಾಗಿ ಹಾರಬಲ್ಲದೆಂದು ಪ್ರಸಿದ್ಧಿಯು. ಈ ಪಕ್ಷಿಯಂತೆ ಎಂದು ಋಷಿಯು ಉಪಮಾನವನ್ನು ಹೇಳಿರುವನು

**ರಜಾಂಸಿ**—ಉದಕಗಳನ್ನು ಎಂದರೆ ಹರಿಯುವ ನೀರಿನ ಪ್ರವಾಹಗಳನ್ನು **ಉದಕಂ ರಜ ಉಚ್ಯತೇ** ಎಂದು ಯಾಸ್ಕರ ವಚನವಿರುವುದು (ನಿ. ೪-೧೯).

॥ ವ್ಯಾಕರಣಪ್ರಕ್ರಿಯಾ ॥

**ಹೃದಿ**—ಹೃದಯ ಶಬ್ದಕ್ಕೆ ಸಪ್ತಮೀ ಏಕವಚನ ಪರದಲ್ಲಿರುವಾಗ **' ಪದ್ದನ್ನೋಮಾಸ್ ಹೃದ್-'** (ಪಾ. ಸೂ. ೬-೧-೬೩) ಸೂತ್ರದಿಂದ ಹೃದಾದೇಶ. ಹೃದಿ ಎಂದು ರೂಪವಾಗುತ್ತದೆ. **' ಊಡಿದಂಪದಾದಿ '** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜಘ್ನುಷಃ**—ಹನ ಹಿಂಸಾಗತ್ಯೋಃ ಧಾತು. ಲಿಟ್ಟಿಗೆ **ಕ್ವಸುಶ್ಚ** ಸೂತ್ರದಿಂದ ಕ್ವಸು ಆದೇಶ. ಕ್ವಸು ಪರದಲ್ಲಿರುವಾಗ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ, ಚುತ್ವ. **ಅಭ್ಯಾಸಾಚ್ಚ** ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಹನ್ನಿನ ಹಕಾರಕ್ಕೆ ಕುತ್ವದಿಂದ ಘಕಾರ. ಜಘ್ನಿನ್ವಸ್ ಶಬ್ದವಾಗುತ್ತದೆ. ಷಷ್ಠೀ ಏಕವಚನ ಪರದಲ್ಲಿರುವಾಗ **' ವಸೋಃ ಸಂಪ್ರಸಾರಣಂ '** (ಪಾ. ಸೂ. ೬-೪-೧೩೧) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣದಿಂದ

ಉಕಾರ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. ಅಜಾದಿ ಪ್ರತ್ಯಯಪರದಲ್ಲಿರುವುದರಿಂದ **'ಗಮಹನಜನ'** (ಪಾ. ಸೂ. ೬-೪-೯೮) ಎಂಬುದರಿಂದ ಹನ್ನಿನ ಉಪಧಾ ಅಕಾರಕ್ಕೆ ಲೋಪ. ಜಘ್ನು ಸ್+ಅಸ್ ಎಂದಿರುವಾಗ **ಶಾಸಿವಸಿ ಘಸೀನಾಂ ಚ** ಎಂಬುದರಿಂದ ಸಕಾರಕ್ಕೆ ಷತ್ವ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಜಘ್ನುಷಃ ಎಂದು ರೂಪವಾಗುತ್ತದೆ. ಇಲ್ಲಿ **' ಷತ್ವತುಕೋರಸಿದ್ಧಃ '** (ಪಾ. ಸೂ. ೬-೧-೮೬) ಷತ್ವ, ಮತ್ತು ತುಕಾಗಮ ಮಾಡುವಾಗ ಏಕಾದೇಶ ಶಾಸ್ತ್ರವು ಅಸಿದ್ಧವಾಗುತ್ತದೆ, ಎಂಬುದರಿಂದ **ಸಂಪ್ರಸಾರಣಾಚ್ಚ** ಎಂಬುದರಿಂದ ಬಂದಿರುವ ಪೂರ್ವರೂಪವು ಯದ್ಯಪಿ ಅಸಿದ್ಧವಾಗುತ್ತದೆ. ಆಗ ನಿಮಿತ್ತವಿಲ್ಲದಿರುವುದರಿಂದ ಷತ್ವ ಬಾರದೇ ಹೋಗಬೇಕಾಗುತ್ತೆ. ಆದರೆ **' ಸಂಪ್ರಸಾರಣ ಙೀಟ್ಸು ಪ್ರತಿಷೇಧೋ ವಕ್ತವ್ಯಃ '** (ಕಾ. ೬-೧-೮೬-೧) ಎಂಬ ವಾರ್ತಿಕದಿಂದ ಅಸಿದ್ಧವದ್ಭಾವಕ್ಕೆ ಪ್ರತಿಷೇಧ ಹೇಳಿರುವುದರಿಂದ ಅಸಿದ್ಧವಾಗುವುದಿಲ್ಲ. ಇದರಿಂದ ಅಸಿದ್ಧವಾಗದಿದ್ದರೂ, **' ಅಸಿದ್ಧ-ವದತ್ರಾ ಭಾತ್ '** (ಪಾ. ಸೂ. ೬-೪-೨೨) ಎಂಬುದರಿಂದ ಸಂಪ್ರಸಾರಣಕ್ಕೆ ಅಸಿದ್ಧವದ್ಭಾವವು ಬರುವುದರಿಂದ, ಅದರಿಂದ ಅಜಾದಿಪ್ರತ್ಯಯಪರದಲ್ಲಿರದಿದ್ದುದರಿಂದ ಉಪಧಾಲೋಪ ಬಾರದೇ ಹೋಗಲಿ ಎಂದು ಅದರಮೇಲೆ ಶಂಕೆ ಬರುತ್ತದೆ. ಆದರೆ ಅಲ್ಲಿಯೂ ಅಸಿದ್ಧವದ್ಭಾವವನ್ನು ಹೇಳಲು ಸಮಾನಾಶ್ರಯತ್ವವು (ನಿಮಿತ್ತಕತ್ವ) ಇರಬೇಕೆಂದು ನಿಯಮಿಸಿರುವುದರಿಂದ, ಉಕ್ತದೋಷ ಬರುವುದಿಲ್ಲ. ಸಂಪ್ರಸಾರಣವು ಷಷ್ಠ್ಯೇಕವಚನವನ್ನು ನಿಮಿತ್ತೀಕರಿಸಿ ಬರುತ್ತದೆ. ಆದುದರಿಂದ ಸಮಾನಾಶ್ರಯತ್ವವು ಇರುವುದಿಲ್ಲ.

**ಸ್ರವಂತೀಃ**—ಸ್ರು ಗತೌ ಧಾತು. ಭ್ವಾದಿ. ಲಡರ್ಥದಲ್ಲಿ **ಲಟಃ ಶತೃಶಾನಚೌ** ಸೂತ್ರದಿಂದ ಶತೃ ಪ್ರತ್ಯಯ. **ಕರ್ತರಿ ಶಪ್** ಎಂಬುದರಿಂದ ಶಪ್ ವಿಕರಣ. ಶಪ್ ನಿಮಿತ್ತಕವಾಗಿ ಧಾತುವಿಗೆ ಗುಣ, ಅವಾದೇಶ. ಸ್ರವತ್ ಶಬ್ದವಾಗುತ್ತದೆ. ಸ್ತ್ರೀತ್ವದಲ್ಲಿ **ಉಗಿತಶ್ಚ** ಸೂತ್ರದಿಂದ ಙೀಪ್. **' ಶಪ್‌ಶ್ಯನೋರ್ನಿತ್ಯಂ '** (ಪಾ ಸೂ. ೭-೧-೮೧) ಎಂಬುದರಿಂದ ಶಪ್ಪಿನ ಅಕಾರದ ಪರದಲ್ಲಿರುವ ಶತೃವಿಗೆ ನದೀ ಪರದಲ್ಲಿರುವುದರಿಂದ ನಿತ್ಯವಾಗಿ ನುಮಾಗಮ ಬರುತ್ತದೆ. ಸ್ರವಂತೀ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತೆ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುತ್ತದೆ ಧಾತು ಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಅತರಃ**—ತೄ ಪ್ಲವನತರಣಯೋಃ ಧಾತು. ಭ್ವಾದಿ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಅತರಃ ಎಂದು ರೂಪವಾಗುತ್ತದೆ. ಯನ್ನವತಿಂ ಎಂದು ಹಿಂದೆ ಯಚ್ಛಬ್ದದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧವು ಬರುತ್ತದೆ. ಅಡಾಗಮವು ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ‖ ೧೪ ‖

॥ ಸಂಹಿತಾಪಾಠಃ ॥

ಇಂದ್ರೋ ಯಾತೋಽವಸಿತಸ್ಯ ರಾಜಾ ಶಮಸ್ಯ ಚ ಶೃಙ್ಗಿಣೋ
ವಜ್ರಬಾಹುಃ ।
ಸೇದು ರಾಜಾ ಕ್ಷಯತಿ ಚರ್ಷಣೀನಾಮರಾನ್ನ ನೇಮಿಃ ಪರಿ
ತಾ ಬಭೂವ ॥೧೫॥

॥ ಪದಪಾಠಃ ॥

ಇಂದ್ರಃ । ಯಾತಃ । ಅವಽಸಿತಸ್ಯ । ರಾಜಾ । ಶಮಸ್ಯ । ಚ । ಶೃಙ್ಗಿಣಃ । ವಜ್ರಽಬಾಹುಃ ।
ಸಃ । ಇತ್ । ಊಂ ಇತಿ । ರಾಜಾ । ಕ್ಷಯತಿ । ಚರ್ಷಣೀನಾಂ । ಅರಾನ್ । ನ ।
ನೇಮಿಃ । ಪರಿ । ತಾ । ಬಭೂವ ॥ ೧೫ ॥

॥ ಸಾಯಣಭಾಷ್ಯಂ ॥

ವಜ್ರಬಾಹುರಿಂದ್ರಃ ಶತ್ರೌ ಹತೇ ಸತಿ ನಿಃಸಪತ್ನೋ ಭೂತ್ವಾ ಯಾತೋ ಗಚ್ಛತೋ ಜಂಗಮಸ್ಯಾವಸಿತಸ್ಯೈಕತ್ರೈವ ಸ್ಥಿತಸ್ಯ ಸ್ಥಾವರಸ್ಯ ಶಮಸ್ಯ ಶಾಂತಸ್ಯ ಶೃಂಗರಾಹಿತ್ಯೇನ ಪ್ರಹರಣಾದಾವಪ್ರವೃತ್ತಸ್ಯಾಶ್ವಗರ್ದಭಾದೇಃ ಶೃಂಗಿಣಃ ಶೃಂಗೋಪೇತಸ್ಯೋಗ್ರಸ್ಯ ಮಹಿಷಬಲೀವರ್ದಾದೇಶ್ಚ ರಾಜಾಭೂತ್ । ಸೇದು ಸ ಏವೇಂದ್ರಶ್ಚರ್ಷಣೀನಾಂ ಮನುಷ್ಯಾಣಾಂ ರಾಜಾ ಭೂತ್ವಾ ಕ್ಷಯತಿ । ನಿವಸತಿ । ತಾ ತಾನಿ ಪೂರ್ವೋಕ್ತಾನಿ ಜಂಗಮಾದೀನಿ ಸರ್ವಾಣಿ ಪರಿ ಬಭೂವ । ವ್ಯಾಪ್ತವಾನ್ । ತತ್ರ ದೃಷ್ಟಾಂತಃ । ಅರಾನ್ನ ನೇಮಿಃ । ಯಥಾ ರಥಚಕ್ರಸ್ಯ ಪರಿತೋ ವರ್ತಮಾನಾ ನೇಮಿರರಾನ್ನಾಭೌ ಕೀಲಿತಾನ್ಕಾಷ್ಠವಿಶೇಷಾನ್ವ್ಯಾಪ್ನೋತಿ ತದ್ವತ್ ॥ ಯಾತಃ । ಯಾ ಪ್ರಾಪಣೇ । ಯಾತಿ ಗಚ್ಛತೀತಿ ಯಾತ್ । ಲಟಃ ಶತೃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಸಃ । ಸೋಽಚಿ ಲೋಪೇ ಚೇದಿತಿ ಸಂಹಿತಾಯಾಂ ಸೋರ್ಲೋಪಃ । ತಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಬಭೂವ । ಭವತೇರ್ಲಿಟೋ ಣಲಿ ಭವತೇರಃ ।

ಪಾ. ೭-೪-೭೩ । ಇತ್ಯಭ್ಯಾಸಸ್ಯಾತ್ವಂ । ಕೃತಾಕೃತಪ್ರಸಂಗಿತಯಾ ವುಗಾಗಮಸ್ಯ ನಿತ್ಯತ್ವಾದ್ವೃದ್ಧೇಃ ಪೂರ್ವಂ ವುಗಾಗಮಃ । ಯದ್ವಾ । ಇಂಧಿಭವತಿಭ್ಯಾಂ ಚ । ಪಾ. ೧-೨-೬ । ಇತಿ ಲಿಟ ಕಿತ್ತ್ವಾದ್ವೃದ್ಧ್ಯಭಾವಃ । ನ ಚಾಸಿದ್ಧವದತ್ರಾ ಭಾದಿತಿ ತಸ್ಯಾಸಿದ್ಧತ್ವಾದುವಜಾದೇಶಃ ಶಂಕನೀಯಃ । ವುಗ್ಯುಟಾವುವ್ಙ್ಯಣೋಃ ಸಿದ್ಧೌ ಭವತಃ । ಪಾ. ೬-೪-೨೨-೧೪ । ಇತಿ ತಸ್ಯ ಸಿದ್ಧತ್ವಾತ್ । ತಿಜ್ಞ ತಿಜ ಇತಿ ನಿಘಾತಃ ॥ ೩೮ ॥

॥ ಪ್ರತಿಪದಾರ್ಥ ॥

**ವಜ್ರಬಾಹುಃ**—ವಜ್ರಬಾಹುವಾದ । **ಇಂದ್ರಃ**—ಇಂದ್ರನು (ಶತ್ರುನಾಶವಾದ ನಂತರ) । **ಯಾತಃ**—ಜಂಗಮವಾದುದೂ । **ಅವಸಿತಸ್ಯ**—ಸ್ಥಾವರವಾದುದೂ । **ಶಮಸ್ಯ**—ಕೊಂಬುಗಳಿಲ್ಲದೆ ಸಾಧುವಾದುದೂ । **ಶೃಂಗಿಣಃ ಚ**—ಕೊಂಬುಳ್ಳದೂ ಆದ ಪ್ರಾಣಿಗಳಿಂದ ಕೂಡಿದ ಸಮಸ್ತ ಲೋಕಕ್ಕೆಲ್ಲಾ । **ರಾಜಾ**—ದೊರೆ (ಯಾದನು) । **ಸೇದು**—ಅದೇ ಇಂದ್ರನು । **ಚರ್ಷಣೀನಾಂ**—ಮಾನವರಿಗೂ । **ರಾಜಾ**—ದೊರೆಯಾಗಿ । **ಕ್ಷಯತಿ**—ವಾಸಮಾಡುತ್ತಾನೆ (ನೆಲೆಸಿದ್ದಾನೆ) । **ತಾ**—ಇಂತಹ ಸಕಲ ಜಗತ್ತನ್ನೂ । **ನೇಮಿಃ**—ಚಕ್ರದ ಪರಿಧಿಯು । **ಅರಾನ್ ನ**—ಅರಗಳನ್ನು ಸುತ್ತುವರಿದಿರುವಂತೆ । **ಪರಿ ಬಭೂವ**—ಸುತ್ತುವರಿದು ನಿಂತು ಕೊಂಡನು ॥

॥ ಭಾವಾರ್ಥ ॥

ವಜ್ರಬಾಹುವಾದ ಇಂದ್ರನು ಶತ್ರುನಾಶವಾದ ನಂತರ ಜಂಗಮವಾದುದೂ ಸ್ಥಾವರವಾದುದೂ, ಕೊಂಬುಗಳಿಲ್ಲದೆ ಸಾಧುವಾದುದೂ, ಕೊಂಬುಳ್ಳದೂ ಆದ ಪ್ರಾಣಿಗಳಿಂದ ಕೂಡಿದ ಸಕಲ ಲೋಕಕ್ಕೂ ಅಧಿಪತಿಯಾದನು. ಅದೇ ಇಂದ್ರನು ಮಾನವರಿಗೂ ದೊರೆಯಾಗಿದ್ದಾನೆ. ಚಕ್ರದ ಪರಿಧಿಯು ಚಕ್ರದ ಸಮಸ್ತ ಅರಗಳನ್ನೂ ಸುತ್ತುವರಿದಿರುವಂತೆ ಇಂದ್ರನೂ ಸಹ ಸಕಲ ಜಗತ್ತನ್ನೂ ಸುತ್ತುವರಿದು ನಿಂತಿದ್ದಾನೆ.

## English Translation.

Then Indra, the weilder of thunderbolt became the sovereign ruler of all that is movable and immovable, of hornless and horned cattle; and as he resides as the monarch of men he surrounds all these with his protection as dces the felly surrounds the spokes (of a wheel).

॥ ವಿಶೇಷವಿಷಯಗಳು ॥

**ಯಾತಃ—ಗಚ್ಛತಃ** । ಚಲಿಸುವ ವಸ್ತುಗಳು ಎಂದರೆ ಸಂಚಾರಮಾಡಲು ಸಮರ್ಥವಾದ ಜೀವಜಂತು ಪ್ರಾಣಿಗಳು, ಜಂಗಮವಾದ ಜಗತ್ತು movables-

**ಅವಸಿತಸ್ಯ—ಏಕತ್ರೈವ ಸ್ಥಿತಸ್ಯ** । ಒಂದೇಕಡೆಯಲ್ಲಿರುವ ಎಂದರೆ ಚಲಿಸಲಸಮರ್ಥವಾದ ಸ್ಥಾವರ ಜಗತ್ತು. ಪರ್ವತಾದಿಗಳು, ವೃಕ್ಷಗಳು ಇತ್ಯಾದಿ; immovables.

**ಶಮಸ್ಯ— ಶಾಂತಸ್ಯ ।** ಶಾಂತವಾದ ಎಂದರೆ ಸಾಧುವಾದ ಪ್ರಾಣಿಗಳು. ಇತರರಿಗೆ ಹಿಂಸೆಯನ್ನುಂಟು ಮಾಡುವ ಕೊಂಬು ಮೊದಲಾದವುಗಳಿಲ್ಲದ, ಕುದುರೆ ಕತ್ತೆ ಮೊದಲಾದ ಪ್ರಾಣಿಗಳು.

**ಶೃಂಗಿಣಃ**— ಕೊಂಬುಗಳಿರುವ ಗೋವುಗಳು, ಎಮ್ಮೆಗಳು ಮೊದಲಾದ ಪ್ರಾಣಿಗಳು.

**ಸೇದು ರಾಜಾ ಕ್ಷಯತಿ**—ಆ ಇಂದ್ರನೇ ಈ ಸ್ಥಾವರ ಜಂಗಮಾದಿಗಳಿಗೂ ಸಾಧು ಅಸಾಧು ಪ್ರಾಣಿಗಳಿಗೂ ಮನುಷ್ಯರಿಗೂ ಏಕೈಕ ರಾಜನಾಗಿ (ಅಧಿಪತಿ, ಸ್ವಾಮಿ) ವಾಸಮಾಡುವನು ಎಂದರೆ ಮೆರೆಯುವನು.

**ಅರಾನ್ನ ನೇಮಿಃ ಪರಿ ತಾ ಬಭೂವ**— ಚಕ್ರದ ನೇಮಿಯೆಂಬ ಸುತ್ತುಮರವು ಅರಗಳನ್ನು ಸುತ್ತುಕಟ್ಟಿ ಎಲ್ಲವನ್ನೂ ತನ್ನೊಳಗೊಂಡಿರುವಂತೆ ಇಂದ್ರನು ಮೇಲೆ ಹೇಳಿದ ಸ್ಥಾವರ ಜಂಗಮವಾದ ಜಗತ್ತನ್ನೂ, ಮನುಷ್ಯರನ್ನೂ ಪಾಲಿಸುತ್ತಾ ಅವರನ್ನೆಲ್ಲಾ ತನ್ನ ಆಳ್ವಿಕೆಯಲ್ಲಿ ಸೇರಿಸಿಕೊಂಡು ಮೆರೆಯುತ್ತಿರುವನು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಯಾತಃ**— ಯಾ ಪ್ರಾಪಣೇ ಧಾತು. ಅದಾದಿ. ಯಾತಿ ಗಚ್ಛತಿ ಇತಿ ಯಾತ್. **ಲಟಃ ಶತೃಶಾನಚೌ** ಎಂಬುದರಿಂದ ಶತೃ. ಷಷ್ಠೀ ಏಕವಚನದಲ್ಲಿ ಯಾತಃ ಎಂದು ರೂಪವಾಗುತ್ತದೆ. **'ಸಾವೇಕಾಚಃ'** (ಪಾ. ಸೂ. ೬-೧. ೧೬೮) ಸೂತ್ರದಿಂದ ಏಕಾಚ್ಚಿನ ಪರದಲ್ಲಿರುವುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಃ**— ಸಃ ಇತ್ ಎಂದಿರುವಾಗ **'ಸೋಽಚಿಲೋಪೇ ಚೇತ್ ಪಾದಪೂರಣಮ್'** (ಪಾ. ಸೂ ೬-೧-೧೩೪) ಎಂಬುದರಿಂದ ಪಾದಪೂರ್ತಿಯಾಗುವುದಕ್ಕೋಸ್ಕರ ಸಂಹಿತಾದಲ್ಲಿ ತಚ್ಛಬ್ದದ ಪರದಲ್ಲಿರುವ ಸುವಿಗೆ ಲೋಪಬರುತ್ತದೆ. ಸ+ಇತ್ ಎಂದಿರುವಾಗ ಗುಣ.

**ತಾ**— ತಚ್ಛಬ್ದದ ದ್ವಿತೀಯಾ ಬಹುವಚನದ ಶಸ್ಸಿಗೆ **ಜಶ್ಶಸೋಃ ಶಿಃ** ಎಂಬುದರಿಂದ ಶಿ ಆದೇಶ. **ಶಿ ಸರ್ವನಾಮಸ್ಥಾನಮ್** ಎಂಬುದರಿಂದ ಅದಕ್ಕೆ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ **ನಪುಂಸಕಸ್ಯ ಝಲಚಃ** ಸೂತ್ರದಿಂದ, ತ್ಯದಾದ್ಯತ್ವ ಬಂದಾಗ ನುಮಾಗಮ. **ಸರ್ವನಾಮಸ್ಥಾನೇ**— ಸೂತ್ರದಿಂದ ಉಪಧಾದೀರ್ಘ. ತಾನಿ ಎಂದಿರುವಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ. **ನಲೋಪಃ ಪ್ರಾತಿ**-ಸೂತ್ರದಿಂದ ನಲೋಪ, ತಾ ಎಂದು ರೂಪವಾಗುತ್ತದೆ.

**ಬಭೂವ**— ಭೂ ಸತ್ತಾಯಾಂ ಧಾತು. ಲಿಟ್ಟಿನಲ್ಲಿ ಣಲಾದೇಶ. **ಭುವೋ ವುಕ್‌ಲುಙ್‌ಲಿಟೋಃ** ಎಂಬುದರಿಂದ ವುಕಾಗಮ. ಲಿಣ್ಣಿಮಿತ್ತಕವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **'ಭವತೇರಃ'** (ಪಾ ಸೂ. ೭-೪-೭೩) ಎಂಬುದರಿಂದ ಅದರ ಉಕಾರಕ್ಕೆ ಅಕಾರಾದೇಶ. **ಅಭ್ಯಾಸೇ ಚರ್ಚ** ಎಂಬುದರಿಂದ ಭಕಾರಕ್ಕೆ ಬಕಾರಾದೇಶ. ಬಭೂವ ಎಂದು ರೂಪವಾಗುತ್ತದೆ ಇಲ್ಲಿ ವುಕಾಗಮ ಬರಬೇಕಾದರೆ ಮೊದಲು ಣಿತ್ ಪ್ರತ್ಯಯ ಪರದಲ್ಲಿರುವುದರಿಂದ **ಅಚೋ ಞ್ಣಿತಿ** ಎಂಬುದರಿಂದ ವೃದ್ಧಿಯು ಪ್ರಾಪ್ತವಾದರೂ ವುಕಾಗಮವು ನಿತ್ಯವಾದುದರಿಂದ ಅದನ್ನು ಬಾಧಿಸಿ ಬರುತ್ತದೆ. **ಕೃತಾಕೃತಪ್ರಸಂಗೀ ಯಃ ಸಃ ನಿತ್ಯಃ** ಎಂದುದರಿಂದ ವೃದ್ಧಿ ಬಂದರೂ ಬಾರದಿದ್ದರೂ ವುಕಾಗಮ ಬರುವುದರಿಂದ ಅದು ನಿತ್ಯಸೂತ್ರವಾಗುತ್ತದೆ. ಅಥವಾ **'ಇಂಧಿಭವತಿಭ್ಯಾಂ ಚ'** (ಪಾ. ಸೂ. ೧-೨-೬) ಸೂತ್ರ

ದಿಂದ ಭೂ ಧಾತುವಿನ ಪರದಲ್ಲಿರುವ ಲಿಟಕ್ಕೆ ಕಿತ್ವವು ವಿಹಿತವಾದುದರಿಂದ **ಕ್ಙಿತಿಚ** ಎಂಬುದರಿಂದ ವೃದ್ಧಿನಿಷೇಧ ಬರುತ್ತದೆ. **ಅಸಿದ್ಧವದತ್ರಾಭಾತ್** ಸೂತ್ರದಿಂದ ಉಕಾಗಮವು ಅಸಿದ್ಧವಾಗುವುದರಿಂದ ಇಲ್ಲಿ **ಅಚಿಶ್ನುಧಾತು-ಭ್ರುವಾಂ** ಸೂತ್ರದಿಂದ ಉವಜಾದೇಶವು ಬರಬೇಕಾಗುತ್ತದೆ. ಇಲ್ಲಿ ಅಜಾದಿ ಪ್ರತ್ಯಯವು ಎರಡು ಸೂತ್ರಕ್ಕೂ ನಿಮಿತ್ತ ವಾದುದರಿಂದ ಸಮಾನಾಶ್ರಯತ್ವವು ಇದೆ. ಆದರೆ **'ವುಗ್ಯುಟಾವುಜ್‌ಯಣೋಃ ಸಿದ್ಧೌ ಭವತಃ'** (ಪಾ. ಸೂ. ೬-೪-೨೨-೧೪) ಎಂಬ ವಾರ್ತಿಕದಿಂದ ಉವಙ್ ವಿಷಯದಲ್ಲಿ ವುಕಾಗಮ ಸಿದ್ಧವೇ ಆಗುವುದರಿಂದ ಉವರ್ಣಾಂತತ್ವ ಇಲ್ಲದಿರುವುದರಿಂದ ಉವಜಾದೇಶ ಬರುವುದಿಲ್ಲ. ಅತಿಜಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತ ಸ್ವರವು ಬರುತ್ತದೆ. ॥ ೧೫ ॥

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀ ವೀರಬುಕ್ಕಭೂಪಾಲ-ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ ದ್ವಿತೀಯೋಽಧ್ಯಾಯಃ ಸಮಾಪ್ತಃ.**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಎರಡನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥

